# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1072
2. ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಗೋವಿಂದರಾಜು
3. ಉತ್ತರಿಸುವ ದಿನಾಂಕ: : 15-03-2021
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಕೋಲಾರ ಜಿಲ್ಲೆಯ ನರಸಾಪುರ ಕೈಗಾರಿಕೆ ಪ್ರದೇಶದಲ್ಲಿರುವ ವಿಸ್ಟ್ರಾನ್ ಆಪಲ್ ಐ ಫೋನ್ ಮೊಬೈಲ್ ಕಂಪನಿಯಲ್ಲಿ ನಡೆದ ಗಲಭೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಗಲಭೆಗೆ ನಿರ್ದಿಷ್ಟವಾದ ಕಾರಣಗಳೇನು: | ಕೋಲಾರ ಜಿಲ್ಲೆಯ ನರಸಾಪುರ ಕೈಗಾರಿಕಾ ಪ್ರದೇಶದಲ್ಲಿರುವ ಮ. ವಿಸ್ಟ್ರಾನ್ ಆಪಲ್ ಐ ಫೋನ್ ಮೊಬೈಲ್ ಕಂಪನಿಯಲ್ಲಿ ನಡೆದ ಗಲಭೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಸದರಿ ಗಲಭೆಗೆ ಈ ಕೆಳಕಂಡ ಕಾರಣಗಳನ್ನು ಗುರುತಿಸಲಾಗಿದೆ.<br>➢ ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರ ನವೆಂಬರ್ ತಿಂಗಳ ವೇತನವನ್ನು ತಡವಾಗಿ ಅಂದರೆ ದಿನಾಂಕ: 11-12-2020 ರಂದು ನೀಡಿರುತ್ತಾರೆ.<br>➢ ಕಾರ್ಖಾನೆಯಲ್ಲಿ ಹೊಸ ಹಾಜರಾತಿ ವ್ಯವಸ್ಥೆಯನ್ನು ಅಳವಡಿಸಿದ್ದು, ಹಾಜರಾತಿ ವ್ಯವಸ್ಥೆಯಲ್ಲಿ ಕೆಲವೊಂದು ನ್ಯೂನತೆಗಳಿದ್ದು, ಕಾರ್ಮಿಕರ ಹಾಜರಾತಿ ಸರಿಯಾಗಿ ನಮೂದಾಗದೇ ಇರುವುದರಿಂದ ಕೆಲವು ಕಾರ್ಮಿಕರಿಗೆ ಕೆಲಸ ನಿರ್ವಹಿಸಿದರೂ ಕಡಿಮೆ ವೇತನ ಪಾವತಿಯಾಗಿರುತ್ತದೆ.<br>➢ ಹಾಜರಾತಿ ವ್ಯವಸ್ಥೆಯಲ್ಲಿನ ನ್ಯೂನತೆಗಳನ್ನು ಕಾರ್ಮಿಕರು ಆಡಳಿತವರ್ಗದವರ ಗಮನಕ್ಕೆ ತಂದಿದ್ದರೂ ಸಹ ಅದನ್ನು ಸರಿಪಡಿಸಿ ತುರ್ತಾಗಿ ಪರಿಹರಿಸುವಲ್ಲಿ ವಿಫಲರಾಗಿರುತ್ತಾರೆ.<br>➢ ಕಾರ್ಖಾನೆಯಲ್ಲಿ 8 ಗಂಟೆಯ ಪಾಳಿಯ ಬದಲಾಗಿ 12 ಗಂಟೆಗಳ ಎರಡು ಪಾಳಿಯಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಿದ್ದು, ಇದರಿಂದಾಗಿ ಕಾರ್ಮಿಕರಿಗೆ ದೊರೆಯಬಹುದಾದ ವೇತನದ ಬಗ್ಗೆ ಸ್ಪಷ್ಟತೆ ಇರಲಿಲ್ಲ. 12 ಗಂಟೆ ಕೆಲಸ ನಿರ್ವಹಿಸಿದರೂ ಸಹ ಅವರ ವೇತನದಲ್ಲಿ ಗಣನೀಯ ಹೆಚ್ಚಳವಾಗದಿರುವುದು ಅಸಮಧಾನಕ್ಕೆ ಕಾರಣವಾಗಿರುತ್ತದೆ.<br>ಮೇಲಿನ ಅಂಶಗಳಿಗೆ ಸಕಾಲದಲ್ಲಿ ಸ್ಪಂದಿಸಿ ಕಾರ್ಮಿಕರ ಸಮಸ್ಯೆಗೆ ಸೂಕ್ತ ಪರಿಹಾರ ಒದಗಿಸಲು ಕಾರ್ಖಾನೆಯ ಮಾನವ ಸಂಪನ್ಮೂಲ ವಿಭಾಗದ ಅಧಿಕಾರಿಗಳು ವಿಫಲರಾಗಿರುತ್ತಾರೆ. |

...2

| | | |
|---|---|---|
| 2 | ಸದರಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಹಾಗೂ ನೌಕರರ ಸಂಖ್ಯೆ ಎಷ್ಟು; | ಕಾರ್ಖಾನೆಯಲ್ಲಿ ಪ್ರಸ್ತುತ 1343 ಖಾಯಂ ಮತ್ತು 2657 ಗುತ್ತಿಗೆ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದಾರೆ.<br>ಘಟನೆಯ ದಿನ 1343 ಖಾಯಂ ಮತ್ತು 8490 ಗುತ್ತಿಗೆ ಕಾರ್ಮಿಕರು ಉತ್ಪಾದನಾ ಕಾರ್ಯಚಟುವಟಿಕೆಯಲ್ಲಿ ತೊಡಗಿದ್ದರು. |
| 3 | ಗಲಭೆಗೆ ಮೊದಲು ಈ ಕಂಪನಿಯಲ್ಲಿ ಕಾರ್ಮಿಕರ ಹಾಗೂ ಕೈಗಾರಿಕೆ ಕಾಯ್ದೆಗಳನ್ನು ಪಾಲಿಸಲಾಗಿದೆಯೇ; | ಸದರಿ ಕಾರ್ಖಾನೆಯು ಹೊಸ ಕಾರ್ಖಾನೆಯಾಗಿದ್ದು, ಈ ಕಾರ್ಖಾನೆಯಲ್ಲಿ ಪೂರ್ಣ ಪ್ರಮಾಣದ ಉತ್ಪಾದನಾ ಕಾರ್ಯಚಟುವಟಿಕೆ ದಿನಾಂಕ: 01-09-2020 ರಿಂದ ಪ್ರಾರಂಭವಾಗಿರುತ್ತದೆ. ಗಲಭೆಯ ಪೂರ್ವದಲ್ಲಿ ಕಾರ್ಮಿಕರಿಂದ ಅಥವಾ ಆಡಳಿತವರ್ಗದವರಿಂದ ಕಾರ್ಖಾನೆಗಳು, ಬಾಯ್ಲರ್‌ಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗಾಗಲೀ ಇತರೆ ಇಲಾಖೆಗಳಿಗಾಗಲೀ ಅಥವಾ ಜಿಲ್ಲಾಡಳಿತಕ್ಕಾಗಲೀ ಯಾವುದೇ ದೂರು ಸ್ವೀಕೃತವಾಗಿರುವುದಿಲ್ಲ.<br>ಸದರಿ ಕಾರ್ಖಾನೆಯಲ್ಲಿ ಅಕ್ಟೋಬರ್ ತಿಂಗಳಿನಲ್ಲಿ ಕಾರ್ಮಿಕರ ಸಂಖ್ಯೆಯನ್ನು 3000 ರಿಂದ 9833 ಕ್ಕೆ ಹೆಚ್ಚಿಸಿದ್ದು, ಇದಕ್ಕೆ ಇಲಾಖೆಯಿಂದ ಪೂರ್ವಾನುಮತಿಯನ್ನು ಪಡೆದಿರುವುದಿಲ್ಲ. |
| 4 | ಕಾರ್ಮಿಕರ ವೇತನ ಹಾಗೂ ಇನ್ನಿತರೆ ಸವಲತ್ತುಗಳನ್ನು ನೀಡುವಲ್ಲಿ ಕಂಪನಿಯು ಸರ್ಕಾರದ ಹಾಗೂ ಕಂಪನಿ ನಿಯಮಗಳನ್ನು ಪಾಲಿಸಿದೆಯೇ; | ಸದರಿ ಕಾರ್ಖಾನೆಯಲ್ಲಿ ಮೇಲೆ ತಿಳಿಸಿದ ಕಾರಣಗಳಿಂದ ಘಟನೆ ಸಂಭವಿಸಿದ್ದು, ಘಟನೆಯ ಹಿಂದಿನ ದಿನ ಅಂದರೆ ದಿನಾಂಕ: 11-12-2020 ರಂದು ಎಲ್ಲಾ ಕಾರ್ಮಿಕರಿಗೆ ವೇತನ ಪಾವತಿಸಿದ್ದು, ಹಾಜರಾತಿ ದೋಷದಿಂದ ನೀಡಬೇಕಾಗಿರುವ ವೇತನ ಕಡಿಮೆ ಪಾವತಿಯಾಗಿರುತ್ತದೆ. ಈ ವ್ಯತ್ಯಾಸದ ವೇತನವನ್ನು ಘಟನೆಯ ನಂತರದ ದಿನಗಳಲ್ಲಿ ಕಾರ್ಮಿಕರಿಗೆ ಪಾವತಿಸಿರುತ್ತಾರೆ. ಆಡಳಿತವರ್ಗದವರು ಮಾನವೀಯತೆಯ ದೃಷ್ಟಿಯಿಂದ ಕಾರ್ಖಾನೆಯಲ್ಲಿ ಉತ್ಪಾದನಾ ಕಾರ್ಯಚಟುವಟಿಕೆ ಇಲ್ಲದಿದ್ದರೂ ಸಹ ಡಿಸೆಂಬರ್ 2020 ರ ವೇತನವನ್ನು ಎಲ್ಲಾ ಕಾರ್ಮಿಕರಿಗೆ ಪಾವತಿಸಿರುತ್ತಾರೆ.<br>ನವೆಂಬರ್ ತಿಂಗಳ ವೇತನ ಪಾವತಿ ಸಂಬಂಧ ವಿಳಂಬ ಪರಿಹಾರ ಧನ ಸಹಾಯ ನೀಡಲು ಆದೇಶಿಸುವ ಸಂಬಂಧ ಕಾರ್ಮಿಕ ಉಪ ಆಯುಕ್ತರ ಕಛೇರಿಯಲ್ಲಿ ವೇತನ ಸಂದಾಯ ಕಾಯ್ದೆಯಲ್ಲಿ ಅರ್ಜಿಯನ್ನು ದಾಖಲಿಸಲಾಗಿರುತ್ತದೆ. |
| 5 | ಕಂಪನಿ ಕಾಯ್ದೆ ಹಾಗೂ ಕಾರ್ಮಿಕರ ವೇತನ ನಿಯಮಗಳ ಕಾಯ್ದೆಯನ್ನು ಪಾಲಿಸಲು ಕಾರ್ಮಿಕ ಇಲಾಖೆಯ ಅಧಿಕಾರಿಗಳು ವಿಫಲವಾಗಿರುವುದು ಏಕೆ; | ಸದರಿ ಕಾರ್ಖಾನೆಯು ಇತ್ತೀಚೆಗಷ್ಟೆ ಉತ್ಪಾದನಾ ಕಾರ್ಯವನ್ನು ಪೂರ್ಣ ಪ್ರಮಾಣವಾಗಿ ಪ್ರಾರಂಭಿಸಿದ್ದು, ದಿನಾಂಕ: 01-09-2020 ರಿಂದ ಸುಮಾರು 3000 ಕಾರ್ಮಿಕರನ್ನು ನೇಮಿಸಿಕೊಂಡಿರುತ್ತಾರೆ. ಅಕ್ಟೋಬರ್ ತಿಂಗಳಲ್ಲಿ ಕಾರ್ಮಿಕರ ಸಂಖ್ಯೆಯನ್ನು 3000 ರಿಂದ 9833 ಕ್ಕೆ ಹೆಚ್ಚಿಸಿರುತ್ತಾರೆ. ಅಲ್ಲದೆ ಕಾರ್ಖಾನೆಯಲ್ಲಿ ಹೊಸದಾಗಿ ಹಾಜರಾತಿ |

| | | |
|---|---|---|
| | | ವ್ಯವಸ್ಥೆಯನ್ನು ಅಳವಡಿಸಿದ್ದು, ಕಾರ್ಮಿಕರ ಹೆಚ್ಚಳದಿಂದ ಹಾಗೂ ಹಾಜರಾತಿ ವ್ಯವಸ್ಥೆಯಲ್ಲಿನ ತಾಂತ್ರಿಕ ದೋಷದಿಂದ ಕಾರ್ಮಿಕರ ವೇತನ ಸರಿಯಾಗಿ ಪಾವತಿಯಾಗದೆ ಇರುವುದರಿಂದ ಹಾಗೂ ಸಮಯಕ್ಕೆ ಸರಿಯಾಗಿ ನಿಗಧಿತ ವೇತನ ನೀಡದಿರುವುದು ಮತ್ತು ಕಾರ್ಮಿಕರ ಹೆಚ್ಚಳಕ್ಕೆ ಅನುಗುಣವಾಗಿ ಮಾನವ ಸಂಪನ್ಮೂಲ ಅಧಿಕಾರಿಗಳ ನೇಮಕಾತಿ ಮಾಡದಿರುವುದು, ಕಾರ್ಮಿಕರ ಮತ್ತು ಆಡಳಿತವರ್ಗದವರ ಮಧ್ಯೆ ಉತ್ತಮ ಬಾಂಧವ್ಯವನ್ನು ಏರ್ಪಡಿಸಲು ವಿಫಲರಾಗಿರುತ್ತದೆ. ಕಾರ್ಖಾನೆಯಲ್ಲಿನ ಸಮಸ್ಯೆಗಳ ಬಗ್ಗೆ ಕಾರ್ಮಿಕರಾಗಲೀ/ ಆಡಳಿತವರ್ಗದವರಾಗಲೀ ಕಾರ್ಖಾನೆಗಳು, ಬಾಯ್ಲರ್‌ಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಅಥವಾ ಜಿಲ್ಲಾಡಳಿತಕ್ಕೆ ಯಾವುದೇ ದೂರು ನೀಡಿರುವುದಿಲ್ಲ.<br>ಈ ಹಿನ್ನಲೆಯಲ್ಲಿ ಇಲಾಖೆಯ ಅಧಿಕಾರಿಗಳ ಯಾವುದೇ ವಿಫಲತೆ ಇರುವುದಿಲ್ಲ. ಘಟನೆಯ ನಂತರ ಇಲಾಖೆಯ ಅಧಿಕಾರಿಗಳು ತಕ್ಷಣ ಕಾರ್ಯಪ್ರವೃತ್ತರಾಗಿ ತನಿಖೆಯನ್ನು ಕೈಗೊಂಡು ಕಾರ್ಮಿಕರಿಗೆ ಸಿಗಬೇಕಾದ ವ್ಯತ್ಯಾಸ ವೇತನವನ್ನು ಆಡಳಿತವರ್ಗದವರಿಂದ ಕೊಡಿಸಲು ಮತ್ತು ವೇತನ ವಿಳಂಬದ ಸಂಬಂಧ ಪರಿಹಾರ ಕೋರಿ ಅರ್ಜಿಯನ್ನು ದಾಖಲಿಸಲಾಗಿರುತ್ತದೆ. |
| 6 | ಪ್ರಸ್ತುತ ಕಂಪನಿಯು ಪುನರಾರಂಭವಾಗಿರುವುದರಿಂದ ಹಿಂದಿನ ಸಮಸ್ಯೆಗಳೆಲ್ಲವನ್ನು ಪರಿಹರಿಸಲಾಗಿದೆಯೇ? | ಪ್ರಸ್ತುತ ಕಾರ್ಖಾನೆಯಲ್ಲಿ ಉತ್ಪಾದನಾ ಕಾರ್ಯಚಟುವಟಿಕೆ ಪ್ರಾರಂಭವಾಗಿದ್ದು, 1343 ಖಾಯಂ ಮತ್ತು 2657 ಗುತ್ತಿಗೆ (ಒಟ್ಟು 4000) ಕಾರ್ಮಿಕರು ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಉತ್ಪಾದನಾ ಕಾರ್ಯಚಟುವಟಿಕೆ ಹಂತ ಹಂತವಾಗಿ ಪುನರಾರಂಭಗೊಂಡಿರುತ್ತದೆ. ಕಾರ್ಖಾನೆಯಲ್ಲಿ ವೇತನ ವಿಳಂಬ ಹಾಜರಾತಿ ದೋಷ ಹಾಗೂ ಕಾರ್ಮಿಕ ಕಾಯ್ದೆಗಳ ಪಾಲನೆಯ ಕುರಿತು ಕಾರ್ಖಾನೆಗಳು, ಬಾಯ್ಲರ್‌ಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯು ಸೂಕ್ತ ಮಾರ್ಗದರ್ಶನಗಳನ್ನು ನೀಡಿದ್ದು, ಆಡಳಿತವರ್ಗದವರು ಬಾಕಿ ವೇತನ, ವೇತನ ವ್ಯತ್ಯಾಸ, ಇನ್ನಿತರ ಸವಲತ್ತುಗಳನ್ನು ಒದಗಿಸಿರುತ್ತಾರೆ ಮತ್ತು ಇಲಾಖೆಯು ನೀಡಿರುವ ಇನ್ನೂ ಕೆಲವು ಸಲಹೆ/ಸೂಚನೆಗಳನ್ನು ಪಾಲಿಸಲು ಕ್ರಮಗಳನ್ನು ತೆಗೆದುಕೊಂಡಿರುತ್ತಾರೆ. |

ಸಂಖ್ಯೆ: ಕಾಇ 118 ಐಡಿಎಂ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು